ಬದುಕು ಅನ್ಯರ ಮುಂದೆ ನಟಿಸುವ ನಾಟಕವಲ್ಲ
ತವಗಾಗಿ ಬಾಳುವ ರೀತಿ.

**ಶಿವರಾಮ ಕಾರಂತ**


# ಸಂಚಯ

ಕಲಾಸಕ್ತರ ದ್ವೈಮಾಸಿಕ ಜೂನ್ 1991

ಸಂಪುಟ : 5 (ಖಾಸಗಿ ಪ್ರಸಾರಕ್ಕಾಗಿ) ಸಂಚಿಕೆ : 2


## ಈ ಸಂಚಯದಲ್ಲಿ ...


| | |
|---|---|
| ಪ್ರೊ॥ ಮೂರ್ತಿರಾಯರ ಸಂದರ್ಶನ | ಡಿ. ವಿ. ಪ್ರಹ್ಲಾದ್ ಮತ್ತು ನ. ರವಿಕುಮಾರ್ |
| ಎರೆಹುಳ | ಸ್ವಾಮಿನಾಥ |
| 'ಸಂಜೆಗಣ್ಣಿನ ಹಿನ್ನೋಟ' ಒಂದು ಪರಿಚಯ | ಎಸ್. ಎಸ್. ರಮೇಶ್ |
| ಅನುವಾದ 'ರಕ್ಷಕ' | ಓ. ಎನ್. ವಿ. ಕುರುಪ್ |
| ಹತ್ತು ವರ್ಷದ ಅಭಿನಯ ತರಂಗ | ಎಂ. ವಿ. ಮೀರ |
| ಕೋಗಿಲೆಗಳು | ಟಿ. ಎಂ. ಷಡಾಕ್ಷರಿ |
| ಗೆಳತಿಗೆ | ಕೆ. ವೈ. ನಾರಾಯಣ ಸ್ವಾಮಿ |
| ಮುಗಿಸುವ ಮುನ್ನ | |



ಸಂಪಾದಕರು : ಡಿ. ವಿ. ಪ್ರಹ್ಲಾದ್ ಮತ್ತು ಮಂಡಳಿ

ಪ್ರಕಟಣೆ : 'ಸಂಚಯ' ಬಳಗ

ವಾರ್ಷಿಕ ಚಂದಾ : ರೂ. 25/-

ಮುಖಪುಟ : ಅ. ಲ. ನರಸಿಂಹನ್ ಅವರ ಕೃತಿ ಟ್ರಾಜಿಡಿ

ಕೃಪೆ : 5ನೇ ಕಲಾಮೇಳ



ಸಂಚಯದ ವಿಳಾಸ : ನಂ. 28, ಮಾರಮ್ಮನ ದೇವಸ್ಥಾನದ ರಸ್ತೆ
8ನೇ ಕ್ರಾಸ್, ಮಲ್ಲೇಶ್ವರಂ
ಬೆಂಗಳೂರು–560 003

# ಸಂಜೆಗಣ್ಣಿನ ಜೊತೆ ಒಂದು ಸಂವಾದ

ಸಂದರ್ಶನ : **ಡಿ. ವಿ. ಪ್ರಹ್ಲಾದ್**
ಸಹಾಯ : **ನ. ರವಿಕುಮಾರ್**

ಕನ್ನಡದ ಲಲಿತ ಪ್ರಬಂಧಗಳಲ್ಲಿ ಪ್ರೊ॥ ಎ. ಎನ್. ಮೂರ್ತಿರಾಯರು ತಮ್ಮದೇ ಶೈಲಿಯಲ್ಲಿ ಬರೆದವರು, ವಿಶಾಲವಾದ ಮಾಗಿದ ಬದುಕಿನ ಅನುಭವದ ಜೊತೆಗೆ ತಾವು ಕಂಡುಕೊಂಡ ಜೀವನ ದರ್ಶನಗಳಿಂದ ಮೂರ್ತಿರಾಯರು ಅನೇಕ ಒಳನೋಟಗಳನ್ನ ತಮ್ಮ ಪ್ರಬಂಧಗಳಲ್ಲಿ ಕಾಣಿಸಿದ್ದಾರೆ. ಯಾವುದನ್ನೂ ಕುರುಡು ನಂಬಿಕೆಯಾಗಿ ನಂಬದ ಪ್ರತಿಯೊಂದು ನಂಬಿಕೆ ಆಚರಣೆಗಳ ಹಿಂದಿನ ನಿಜತ್ವವನ್ನ ಪ್ರಶ್ನಿಸುವ ಅವರು ವಯಸ್ಸಾದರೂ ಗೊಡ್ಡಾದವರಲ್ಲ, ಕಹಿಯಾದವರಲ್ಲ, ಹೊಸ ವಿಚಾರಗಳನ್ನ ಹೊಸ ಹುಡುಗರ ಹಾಗೆ ಸ್ವಾಗತಿಸುತ್ತಾರೆ. ಅವರ ಅನಿಸಿಕೆಗಳ ಹಿಂದೆ ಬರೀ ತರ್ಕವಷ್ಟೇ ಅಲ್ಲ, ವಿಶಾಲವಾದ ಓದು ಮತ್ತು ಜೀವನದ ಅನುಭವಗಳ ಸಂಗ್ರಹವೇ ಇದೆ. ಇವತ್ತಿನ ವೇಗದ ಜಗತ್ತಿನಲ್ಲಿ ಮೂರ್ತಿರಾಯರಂಥಾ ಹಿರಿಯರು ನಮ್ಮ ತಲೆಮಾರಿನ ಜನಗಳಿಗೆ ಭೀಷ್ಮನ ಹಾಗೆ ಗೋಚರಿಸುತ್ತಾರೆ. ತಮ್ಮ ಓದು ವಿಚಾರಗಳಿಂದ ಅನುಭವದ ಹಿನ್ನೆಲೆಯಲ್ಲಿ ರ್‍ಯಾಷನಲ್ ಎನ್ನಿಸುವ ನಿಲುವುಗಳಿಗೆ ಬರುತ್ತಾರೆ. ತಮ್ಮ ತೊಂಭತ್ತೆರಡನೇ ವಯಸ್ಸಿನಲ್ಲೂ ಹುಡುಗರ ಜೊತೆ ಹುಡುಗರ ಹಾಗೆ ನಗುನಗುತ್ತಾ ಮಾತನಾಡುವ ಮೂರ್ತಿರಾಯರ ಜೊತೆಗಿನ ಮಾತುಕತೆ ಒಂದು ಅಪೂರ್ವ ಅನುಭವ ಅವರ ಜೊತೆ ನಾವು ನಡೆಸಿದ ಸಂದರ್ಶನ ಇದು.

● ಕನ್ನಡ ಸಾಹಿತ್ಯದ ಪ್ರಮುಖ ಚಳುವಳಿಗಳನ್ನ ನೀವು ಕಂಡಿದ್ದೀರಿ ಈ ಬಗೆಗೆ ನಿಮ್ಮ ಅನಿಸಿಕೆ ಏನು ?

○ ಈ ಎಲ್ಲ ಬದಲಾವಣೆಗಳನ್ನ ನಾನು ಸ್ವಾಗತಿಸುತ್ತೇನೆ. ಒಂದು ಸಂಪ್ರದಾಯ ಬೆಳೆಯುತ್ತೆ. ಆ ಸಂಪ್ರದಾಯ ತನಗೆ ಹಿಂದೆ ಇದ್ದ ಸಂಪ್ರದಾಯುವನ್ನು

ವಿರೋಧಿಸಿ ಬೆರೆಯುತ್ತೆ. ನಮ್ಮಲ್ಲಿ ವೀರ ಕಾವ್ಯ ಮಹಾಕಾವ್ಯಗಳ ವ್ಯಾಮೋಹದಿಂದ ಬಿಡುಗಡೆ ಪಡೆದು ಗದ್ಯ ಕಾದಂಬರಿ ಪ್ರಬಂಧಗಳು ಮುಂತಾದ ಸಾಹಿತ್ಯ ಪ್ರಕಾರಗಳನ್ನ ತಂದೋರು, ಹಿಂದಿನ ಕಾಲದ ಸಾಹಿತ್ಯವನ್ನು ವಿರೋಧಿಸಲೇ ಬೇಕಾಗಿತ್ತು. ಹಳೆಯ ರೀತಿಯೇ ಸರಿ ಎಂದು ನಂಬಿದ್ದ ಕಾಲದಿಂದ ಈಚೆಗೆ ಮಹತ್ತರ ಬದಲಾವಣೆ ಆಯಿತು. ಹಿಂದಿನ ಪುರಾಣಗಳಿಂದ ಇವತ್ತಿನ ಮನುಷ್ಯನ ವರ್ತಮಾನಕ್ಕೆ ಸಾಹಿತ್ಯ ಬದಲಾಯಿತು. ಇತ್ತೀಚಿನ ಸೆಮಿನಾರ್ ಒಂದರಲ್ಲಿ ಯಾರೋ ನವೋದಯ ಕಾಲವು Dead past ಎನ್ನೋ ಅರ್ಥದ ಮಾತುಗಳನ್ನ ಹೇಳಿದರು. ಆದರೆ ಆ ಕಾಲಕ್ಕೆ ಅದು ಬಂಡಾಯವಾಗಿತ್ತು. ಹೊಸ ಚಳುವಳಿಗಳನ್ನ ಒಪ್ಪುವವರು ಹಿಂದಿನದನ್ನ ಕುರಿತು ಬಹಳ ಖಾರವಾಗಿಯೇ ಮಾತನಾಡುತ್ತಾರೆ. ಅದು ಸ್ವಾಭಾವಿಕ ಎನ್ನಿಸುತ್ತೆ, ಅವರ ಅಭಿಪ್ರಾಯ ಸ್ಥಾಪಿಸಬೇಕಾದಾಗ ಹಿಂದಿನದ್ದನ್ನ ವಿರೋಧಿಸಬೇಕಾಗತ್ತೆ. ಈ ಕ್ರಾಂತಿಕಾರಿಗಳೂ ಮುಂದೆ ಸಂಪ್ರದಾಯವಾದಿಗಳಾಗೋದು ಸಹಜವೇ, ಎಡಪಂಥೀಯರು ಹೇಳೋ ಹಾಗೆ being,not being,and becoming ವಸ್ತು ಸ್ಥಿತಿಯನ್ನು ಬದಲಾಯಿಸೋದು ಅದರಿಂದ ಮತ್ತೊಂದು ಹೊಸದು ಆಗೋದು ತುಂಬಾ ಆರೋಗ್ಯಕರ ಕ್ರಿಯೆ.

● ನಿಮ್ಮ ಕಾಲದ ಇತರೆ ಬರಹಗಾರರ ಹಾಗೆ ನೀವು ಸಾಹಿತ್ಯದ ಬೇರೆ ಬೇರೆ ಪ್ರಕಾರಗಳಲ್ಲಿ ಬರೆಯಲಿಲ್ಲ ಏಕೆ ?

○ ಬಹುಶಃ ಒಂದು ಕಾರಣ ಎಂದರೆ ಕನ್ನಡದ ಬರಹಗಾರ ಆಗಬಲ್ಲೆ ಎನ್ನೋ ಯೋಚನೆಯೇ ನನಗಿರಲಿಲ್ಲ. ಸಂಪೂರ್ಣವಾಗಿ ಇಂಗ್ಲೀಷಿನಲ್ಲಿ ಮುಳುಗಿದ್ದೆ. ನನ್ನ ನಲವತ್ತನೇ ವಯಸ್ಸಿನವರೆಗೂ ಮನೆ ಮಾತು ಕೂಡಾ ಇಂಗ್ಲೀಷ್ ಆಗಿತ್ತು. ಈಗ ಕನ್ನಡದ ನಡುವೆ ಇಂಗ್ಲೀಷ್ ಬಳಸೋ ಹಾಗೆ ಆಗ ಇಂಗ್ಲೀಷ್ ನಡುವೆ ಕನ್ನಡ ಸ್ವಲ್ಪ ಬಳಸುತ್ತಿದ್ದೆ. ಯಾವುದೋ ಒಂದು ಸಂದರ್ಭದಲ್ಲಿ ಮುಂಬಯಿಯ "ಪ್ರಬೋಧಕ" ಎನ್ನೊ ಪತ್ರಿಕೆಗೆ "ಹೂಗಳು" ಎನ್ನುವ ಪ್ರಬಂಧ ಬರೆದೆ. ಅದು ನನ್ನ ಕನ್ನಡದ ಬರಹದ ಮೊದಲ ಪ್ರಯತ್ನ, ನಂತರ ಕನ್ನಡದಲ್ಲಿ ಆಗಾಗ್ಗೆ ಬರೆಯಲು ತೊಡಗಿದ್ದೆ. ನಾನು ಕನ್ನಡದ ಬರಹಗಾರ ಅಂತ ತಿಳಿದುಕೊಂಡಿದ್ದರೆ ಪ್ರಾಯಶಃ ಸಾಹಿತ್ಯದ ಇತರೆ ಪ್ರಕಾರಗಳಲ್ಲಿ ಬರೆಯುತ್ತಿದ್ದೆನೋ ಏನೋ, ಆದರೆ ಕನ್ನಡದ ಬರಹಗಾರನಾಗೋ ಯೋಚನೆಯೇ ಆ ಕಾಲಕ್ಕೆ ನನಗೆ ಇರಲಿಲ್ಲ.

● ಇವತ್ತಿನ ಸಂಕೀರ್ಣತೆ ಧಾವಂತ ಒತ್ತಡಗಳನ್ನು ಸಣ್ಣ ಕಥೆ, ಕಾದಂಬರಿ, ಕಾವ್ಯ

ಗಳಲ್ಲಿ ಹಿಡಿದಿಟ್ಟ ಹಾಗೆ ಲಲಿತ ಪ್ರಬಂಧಗಳಲ್ಲಿ ಸಾಧ್ಯವೆ ? ಅದಕ್ಕೆ ತಕ್ಕ ಭಾಷೆ ತಂತ್ರಗಳ ಚೌಕಟ್ಟು ಇಲ್ಲದ ಕಾರಣ ಅದು ಹೆಚ್ಚು ಗಮನ ಸೆಳೆದಿಲ್ಲವೆ ?

○ ನೀವು ಹೇಳಿದಿರಿ ಇವತ್ತಿನ ಸಮಸ್ಯೆಗಳನ್ನು ಸಾಹಿತ್ಯದ ಕಾದಂಬರಿ ಸಣ್ಣಕಥೆ ಮುಂತಾದ ಪ್ರಕಾರಗಳಲ್ಲಿ ಚರ್ಚಿಸಬಹುದು ಅಂತ, ಆದರೆ ಆ ಚರ್ಚೆ ಒಂದು ದೊಡ್ಡ ಮಿತಿಯೊಳಗೇ ನಡೆಯುತ್ತೆ. ಆ ಮಿತಿ ಬಿಟ್ಟರೆ ಕಾದಂಬರಿ ಕಾದಂಬರಿಯಾಗೋದಿಲ್ಲ, ಸಣ್ಣ ಕಥೆ ಸಣ್ಣ ಕಥೆಯಾಗೋದಿಲ್ಲ, ಅದು ಹೆಚ್ಚು ಕಡಿಮೆ ವಿಚಾರ ಸಾಹಿತ್ಯವಾಗಿ ಅದರ ಸ್ವರೂಪವೇ ಕೆಡುತ್ತೆ. ಉದಾಹರಣೆಗೆ ಭೈರಪ್ಪನವರ 'ದಾಟು' ಕಾದಂಬರಿಯಲ್ಲಿ ಜಾತಿಯ ಸಮಸ್ಯೆ ಕುರಿತಾದ ಚರ್ಚೆ ನಡೆದಿದೆ. ಆದರೆ ಇದೂ ಕೂಡಾ Conservative ಎನ್ನುವ ಆರೋಪ ಇದೆ. ಇದರ ಮೂಲ ಆಶಯ ಮತ್ತು ಇದು ಯಾವ ಸಮಸ್ಯೆ ಕುರಿತು ಹೇಗೆ ಹೇಳಿದೆ ಎಂದು ವಿವರಿಸುವುದಕ್ಕೆ ಒಂದು ದೊಡ್ಡ ವ್ಯಾಖ್ಯಾನ ಕೊಡಬೇಕಾಗತ್ತೆ. ಕಾದಂಬರಿಯ ಬಹುಪಾಲು ಓದುಗರು ಅದರ ಸೂಕ್ಷ್ಮಗಳನ್ನ ಗಮನಿಸುವುದೇ ಇಲ್ಲ. ಬರೀ ಕಾದಂಬರಿ ಪ್ರಕಾರವಾಗಲೀ, ಸಣ್ಣ ಕಥೆಯಾಗಲೀ ಇವತ್ತಿನ ಆಧುನಿಕ ಬದುಕನ್ನ ಅದರ ಸಮಸ್ಯೆಗಳನ್ನ ಹಿಡಿದಿಡಲು ಅಸಮರ್ಥವಾಗುತ್ತದೆ. Longer range ಮತ್ತು wider effectನಲ್ಲಿ ಇವುಗಳ ಪರಿಣಾಮ ಹೆಚ್ಚಾಗಿ ಆಗಲಾರದು. ಈ ಮಾತು ಲಲಿತ ಪ್ರಬಂಧದ ವಿಷಯದಲ್ಲೂ ಸಲ್ಲುತ್ತದೆ; ಸೃಜನಶೀಲ ಸಾಹಿತ್ಯವಲ್ಲದ ವಿಷಯದಲ್ಲೂ ಸಲ್ಲುತ್ತದೆ.

● ಹಾಗಿದ್ದರೆ ಈ ಸಮಸ್ಯೆಗಳನ್ನ ಸಾಹಿತ್ಯದ ಮೂಲಕ ಬಿಂಬಿಸಲು ಹೇಗೆ ಸಾಧ್ಯ ?

○ ಎರಡು ರೀತಿಯಲ್ಲಿ ಇದು ಸಾಧ್ಯ : ಒಂದು ಸಮಾಜದ ಸಮಸ್ಯೆಗಳನ್ನು ಮುಖ್ಯ ವಸ್ತುವಾಗಿಟ್ಟುಕೊಂಡು ಅದನ್ನು ಜನ ದಿಟ್ಟಿಸಿ ನೋಡುವಂತೆ ಪ್ರತಿ ಬಿಂಬಿಸಬಲ್ಲ ಸೃಜನಶೀಲ ಕೃತಿಗಳು ; ಮತ್ತೊಂದು ಪೂರ್ಣವಾದ ವಿಚಾರ ಸಾಹಿತ್ಯದ ಮೂಲಕ ನಾವು ಸಮಾಜದ ಸಮಸ್ಯೆಗಳನ್ನು ಸಂಪೂರ್ಣವಾಗಿ ಪರಿಶೀಲಿಸುವುದು. ವಿಚಾರ ಸಾಹಿತ್ಯಕ್ಕೂ ಸೃಜನಶೀಲ ಸಾಹಿತ್ಯದ ಮೆರುಗು ಕೊಡಬಹುದು. ಒಂದು ಕಾದಂಬರಿಯಲ್ಲಿ ಸಮಸ್ಯೆಯೊಂದರ ಎಲ್ಲಾ ಮುಖಗಳನ್ನೂ ತರಲು ಸಾಧ್ಯವಿಲ್ಲ. ಅದನ್ನು ಪ್ರಾಸಂಗಿಕವಾಗಿ ತರಬಹುದೇ ಹೊರತು ಎಲ್ಲ ಮುಖಗಳನ್ನ ಪರಿಣಾಮಗಳನ್ನ ವಿವರಿಸುತ್ತಾ ಹೊರಟರೆ ಅದು ಕಾದಂಬರಿಯಾಗೋಲ್ಲ. ಸೃಜನಶೀಲ ಸಾಹಿತ್ಯ Sparking plug ಇದ್ದ ಹಾಗೆ.

● ನಮಗೆ ಇವತ್ತಿಗೆ ಸೃಜನ ಸಾಹಿತ್ಯ ಹೆಚ್ಚಾಗಿ ಬರಬೇಕೋ ಅಥವಾ ವಿಚಾರ ಸಾಹಿತ್ಯವೋ ?

○ ಇವತ್ತಿನ ಸ್ಥಿತಿಯಲ್ಲಿ ನಮಗೆ ವಿಚಾರ ಸಾಹಿತ್ಯವೇ ಹೆಚ್ಚಾಗಿ ಬರಬೇಕು, ಸೃಜನ ಸಾಹಿತ್ಯ ಸ್ವಲ್ಪ ಕಡಿಮೆಯಾದರೂ ಪರವಾಗಿಲ್ಲ.

● ನೀವು ಒಂದು ಕಡೆ ಸೃಜನ ಸಾಹಿತ್ಯ ವ್ಯಕ್ತಿಯ ಭಾವುಕತೆ ಉದ್ದೀಪಿಸುವ ಮೂಲಕ ಸಂಸ್ಕೃತಿಯ ನಿರ್ಮಾಣದಲ್ಲಿ ಹೆಚ್ಚು ಸಹಾಯಕವಾಗುತ್ತದೆ ಎಂದಿದ್ದೀರಿ ಹಾಗಿದ್ದರೆ ಸೃಜನ ಸಾಹಿತ್ಯ ಈ ದೃಷ್ಟಿಯಿಂದ ಹೆಚ್ಚು ಅಗತ್ಯ ಎನ್ನಿಸೋದಿಲ್ಲವೆ ?

○ ಸೃಜನ ಸಾಹಿತ್ಯ ಅಗತ್ಯ ಎನ್ನೋ ವಿಷಯದಲ್ಲಿ ಏನೇನೂ ಅನುಮಾನವಿಲ್ಲ, ಜನರಲ್ಲಿ ಎಚ್ಚರಿಕೆ ಮಾಡಿಸೋ ದೃಷ್ಟಿಯಿಂದ ಸೃಜನ ಸಾಹಿತ್ಯ ಅದರಲ್ಲೂ ಸಾಮಾಜಿಕ ಸಮಸ್ಯೆಗಳನ್ನ ಕುರಿತಾದದ್ದು ಬರಬೇಕು. ಆ ಎಚ್ಚರಿಕೆ ಬಂದಮೇಲೆ ಅದರ Ramifications ಅನ್ನು ವಿಚಾರ ಸಾಹಿತ್ಯ ಪರಿಶೀಲಿಸುತ್ತದೆ. ಆದರೆ ಇವತ್ತಿನ ಅಗತ್ಯ ವಿಚಾರ ಸಾಹಿತ್ಯದ್ದೇ ಹೆಚ್ಚು ಎನ್ನಿಸುತ್ತದೆ. ಸಮಸ್ಯೆಗಳಿಗೆ ಪರಿಹಾರ ಹುಡುಕುವುದು ನಮ್ಮ ಉದ್ದೇಶವಾದ್ದರಿಂದ, ವಿಚಾರ ಸಾಹಿತ್ಯ ಅದನ್ನ ಸ್ಪಷ್ಟಗೊಳಿಸಲು ಬೇಕಾಗುತ್ತೆ.

● ಇವತ್ತಿನ ಭಾರತದ ಸಂದರ್ಭದಲ್ಲಿ ಆಧುನಿಕ ಜಗತ್ತಿನ ಪ್ರಗತಿಯ ಕಲ್ಪನೆಗೂ ಮತ್ತು ಈ ನೆಲದ ಗುಣಕ್ಕೂ ವ್ಯತ್ಯಾಸ ಇರುವುದರ ಕಾರಣದಿಂದ, ಇವತ್ತು ನಮ್ಮಲ್ಲಿ ಪಾಶ್ಚಾತ್ಯ ಮತ್ತು ಭಾರತೀಯ ಸಂಸ್ಕೃತಿಗಳ ನಡುವೆ ಘರ್ಷಣೆ ಇದೆ ಎನ್ನಿಸೋದಿಲ್ಲವೆ ?

○ ಇದೇ ವಿಚಾರ ನನ್ನನ್ನೂ ತುಂಬಾ ಕಾಡಿದೆ. ಈ ಸಮಸ್ಯೆ ನನಗೆ ಪೂರ್ತ ಅರ್ಥವಾಗಿದೆ ಎಂದೂ ಹೇಳಲಾರೆ, ತಿಳಿದಷ್ಟು ಹೇಳುತ್ತೇನೆ. ನಾವು ತಿಳಿದುಕೊಂಡಿರುವುದು : 'ಪಾಶ್ಚಾತ್ಯರು ಇಹಲೋಕಕ್ಕೆ ಬೇಕಾಗೋ ಸಾಮಗ್ರಿಗಳನ್ನು ಸಾಕಷ್ಟು ಶೇಖರಿಸುತ್ತಾ ಇದ್ದಾರೆ. ಅಂಥ ಸಾಮಗ್ರಿಗಳನ್ನ ಸೃಷ್ಟಿಸುತ್ತಲೂ ಇದ್ದಾರೆ. ಅದಕ್ಕೆ ಬೇಕಾದ ಏಕಾಗ್ರತೆ ಮನಸ್ಸಿನ ಶಕ್ತಿ ಇವುಗಳು ಅವರಲ್ಲಿ ಬೆಳೆಸಿಕೊಂಡಿದ್ದಾರೆ. ನಾವಾದರೋ ಇಹಕ್ಕೆ ಅಷ್ಟು ಪ್ರಾಮುಖ್ಯ ಕೊಡದವರು ; ನಮ್ಮ ವಿಚಾರಗಳೆಲ್ಲಾ ಆತ್ಮ ಮೋಕ್ಷದ ವಿಚಾರಗಳಲ್ಲಿ, ನಮ್ಮದು spiritual ಸಂಸ್ಕೃತಿ ; ಪಾಶ್ಚಾತ್ಯರದ್ದು material ಸಂಸ್ಕೃತಿ' – ನಮ್ಮಗಳ ಮನಸ್ಸು ಹೀಗೆ ಹರಿಯುತ್ತದೆ. ನಾನು ಆ ಬಗೆಯ ಮಾತನ್ನು ಒಪ್ಪಲಾರೆ. ನನಗೆ ಅನ್ನಿಸುತ್ತದೆ : Material ಮತ್ತು Spiritual ಸಂಸ್ಕೃತಿಗಳಿಗೂ ಅಂಥಾ ವ್ಯತ್ಯಾಸವೇನಿಲ್ಲ, Material Welfare ಅಂದರೆ ಮನುಷ್ಯನ ಆರೋಗ್ಯ ಅವನ ಮನಸ್ಸಿನ ಆರೋಗ್ಯ, ಸಮಾಜದಲ್ಲಿರೋ ಕೊಳಕನ್ನ ತೆಗೆಯಬೇಕು ಎನ್ನೋ ಆಸೆ ; ಮನುಷ್ಯನಲ್ಲಿರುವ ಮೃಗವನ್ನು ಸಾಕಷ್ಟು ಅದುಮಿ ಕೊನೆಗೆ

ಅದನ್ನ ಓಡಿಸೋದೇ spiritual side ಅಂತ ನಾವೂ ಹೇಳುತ್ತೇವೆ. ನಮ್ಮೊಳಗೇ ಇರುವ beast ಎಷ್ಟು ಕಡಿಮೆಯಾಗತ್ತೋ ಅಷ್ಟು ನಾವು spiritiual ಆಗುತ್ತಾ ಇಹಲೋಕದಲ್ಲಿರುವ ನಮ್ಮ ಕಣ್ಣೆದುರಿನ ಮನುಷ್ಯರ ಸಂಕಟ ನಿವಾರಣೆ ಮಾಡಿ ಮಾನವನ ಬದುಕನ್ನ ಉತ್ತಮ ಸ್ಥಿತಿಗೆ ತಂದು ಆತನು ಸುಖವಾಗಿರೋ ಹಾಗೆ ಮಾಡೋದೇ Spirituality ಅಂತ ನನ್ನ ನಂಬಿಕೆ.

● ನಿಮ್ಮ ಜೀವನದ ಅತ್ಯುತ್ತಮ ಮೌಲ್ಯ ಎಂದು ನೀವು ಯಾವುದನ್ನು ಪರಿಗಣಿಸುತ್ತೀರಿ ?

○ ನಾನು ಆಗಲೇ ಹೇಳಿದ ಹಾಗೆ ಯಾವುದು ಮನುಷ್ಯ ಕೋಟಿಯ ಸಂಕಟವನ್ನ ಕಡಿಮೆ ಮಾಡಬಲ್ಲದೋ ಯಾವುದು ಸಂತೋಷ ಹೆಚ್ಚಿಸಬಲ್ಲದೋ ಅದು ನನ್ನ ಬದುಕಿನ ಅತ್ಯುತ್ತಮ ಮೌಲ್ಯ, ನನಗೆ ಮೋಕ್ಷ ಆತ್ಮ ಇವುಗಳ ಬಗ್ಗೆ ಚಿಂತೆ ಇಲ್ಲ.

● ನೀವು ಸಂಸ್ಕೃತಿಯ ಬಗ್ಗೆ ಬಹಳ ಕಡೆ ಹೇಳಿದ್ದೀರಿ, ಅದನ್ನ ಇತರರೂ ತಮ್ಮ ರೀತಿಗಳಲ್ಲಿ ಹೇಳುತ್ತಾರೆ ಸಂಸ್ಕೃತಿ ಕುರಿತ ನಿಮ್ಮ ಪರಿಕಲ್ಪನೆ ಏನು ?

○ ಇದನ್ನ ನಾವು ಎರಡು ರೀತಿ ವಿವರಿಸಬಹುದು. ಒಂದು ನಾವು ಆಚರಿಸೋ ಹಬ್ಬಗಳು, ನಿಮ್ಮ ಸಾಮಾಜಿಕ ವ್ಯವಸ್ಥೆ ಉಡುಗೆ ತೊಡಿಗೆಗಳು ಮುಂತಾದವು. ಇದು ನಮಗೆ 'ಸಂಸ್ಕೃತಿ' ಎನ್ನೋದಕ್ಕೆ ಅರ್ಥ ಕೊಟ್ಟರೆ ಅದು ನಮ್ಮನ್ನ ಅಷ್ಟಾಗಿ ಕಾಡಬೇಕಾಗಿಲ್ಲ. ಇನ್ನೊಂದು, ನಾನು ಮಾಡೋ ಕೆಲಸ. ನಾನು ಸತ್ಯ ಅಂತ ಯಾವುದನ್ನ ನಂಬಿದ್ದೇನೋ ಯಾವ ಮೌಲ್ಯಗಳಲ್ಲಿ ನನಗೆ ನಂಬಿಕೆ ಇದೆಯೋ ಅದಕ್ಕೆ ಅನುಗುಣವಾಗಿ ನನ್ನ ಕೆಲಸಗಳಿವೆಯೆ ? ಇಲ್ಲದೇ ಹೋದಲ್ಲಿ ನಾನು ಸಂಸ್ಕೃತಿಯಿಂದ ಜಾರಿದ್ದೇನೆ ಅಂತ ಅರ್ಥ, ನಾನು ಮಾಡೋ ಪ್ರತಿಯೊಂದು ಕೆಲಸದಲ್ಲೂ ಇತರರಿಗೆ ತೊಂದರೆಯಾಗದೆ. ಅವರ ಅಭಿವೃದ್ಧಿಗೆ ನನ್ನ ಕೈಲಾದ ಮಟ್ಟಿಗೆ ಸಹಕರಿಸುತ್ತಿದ್ದೇನೆಯೆ ? ಎನ್ನೋ ಮನಃಸ್ಥಿತಿ ಇರುವವನು ಸುಸಂಸ್ಕೃತ ವ್ಯಕ್ತಿ ಎನ್ನಿಸುತ್ತೆ.

● ನೀವು ದೇವರನ್ನು ನಂಬೊದಿಲ್ಲ ಎಂದಿದ್ದೀರಿ ಕಾರಣ ಏನು ಸಾರ್ ?

○ 'ದೇವರಿಲ್ಲ' ಅನ್ನೋದರಲ್ಲಿ ನನಗೆ ಸಂತೋಷವೇನೂ ಇಲ್ಲ. ನನಗೆ ಬೇಕಾದ ದೇವರು ಬಂದಲ್ಲಿ ಅವನನ್ನು ನಾನು ಸ್ವಾಗತಿಸುತ್ತೇನೆ. ಒಂದು ಕಡೆ ಹೇಳಿದ್ದೇನೆ. ಮಾನವ ಕುಲದ ಐರನಿ ಎಂದರೆ ಇದು :– ನಮಗೆ ದೇವರು ಬೇಕು ಆದರೆ ಆತನು ಇದ್ದಾನೆ ಅನ್ನೋಕೆ ಸಾಕ್ಷ್ಯವಿಲ್ಲ. ದೇವರು ನಮಗೆ ಹೇಗೆ

ಎನ್ನುವಾಗ ಮುಖ್ಯವಾಗಿ ನನ್ನ ಮನಸ್ಸು ಮನುಷ್ಯನ ಸಂಕಟದ ಮೇಲೆ ಹೋಗತ್ತೆ. ಅವನ Evil ಗಿಂತಲೂ ಹೆಚ್ಚಾಗಿ ಈ ಸಂಕಟ ನನ್ನನ್ನು ಕಾಡುತ್ತೆ. ಭೂಕಂಪ, ಖಾಯಿಲೆಗಳಲ್ಲಿ ಸಾವಿರಾರು ಜನ ಸಾಯುತ್ತಾರೆ. ಆಗ ಅದು Evil ನಿಂದ ಆದದ್ದಲ್ಲ. ಈ ಸಂಕಟಗಳನ್ನ ನಿವಾರಿಸೋ ದೇವರಿದ್ದರೆ ಅವನನ್ನ ಸ್ವಾಗತಿಸಬಹುದು. ಇನ್ನೊಂದು ; ನಮ್ಮೊಳಗಿನ Beast ನಿಂದಲೂ ಸಂಕಟ ಬರುತ್ತೆ ನನ್ನಲ್ಲಿನ ಸ್ವಾರ್ಥ, ಕೋಪ, ಪಶುತನಗಳೂ ಇವೆ. ಹೊರಗಿನಿಂದ ಬಂದ Evil ಒಂದಾದರೆ ನನ್ನೊಳಗೇ ಇರುವುದೂ Evil, ಹಾಗಿದ್ದರೆ ಅದನ್ನ ನಮ್ಮೊಳಗೆ ಇಟ್ಟೋರ್ಯಾರು ?, It must have come from a creation if there is one. ದೇವರು ಒಳ್ಳೆಯದರ ಜೊತೆ ಕೆಟ್ಟದ್ದನ್ನೂ ಸೃಷ್ಟಿಸಿದ್ದು ಯಾಕೆ ? ಇದರ ಜಿಜ್ಞಾಸೆ ತುಂಬಾ ದಿನಗಳಿಂದಲೂ ನಡೆದೇ ಇದೆ. ದೇವರು ನಮ್ಮನ್ನ ಸೃಷ್ಟಿಸಿ ನಿಮಗೆ ಬೇಕಾದ ಹಾಗಿರಿ ಅಂತ ಸ್ವಾತಂತ್ರ್ಯಕೊಟ್ಟ ಎನ್ನುತ್ತಾರೆ. ಸ್ವಾರ್ಥ ಪಶುತನಗಳನ್ನ ಕೊಟ್ಟು ನೀನು ಸ್ವತಂತ್ರ ಎಂದರಾಯ್ತೆ ? ಜಗತ್ತಿನ ನೋವು ದುಷ್ಟತನಗಳು ಇವನ್ನು ಕಂಡಾಗ ಧರ್ಮರಕ್ಷಕ, ದೌಷ್ಟ್ಯ ಶಿಕ್ಷಕ ನಾದ ದೇವರು ಎಂಬ ವ್ಯಕ್ತಿ ಇರುವುದು ಸಾಧ್ಯವಿಲ್ಲ ' ಎನ್ನಿಸುತ್ತದೆ.

---

**ಮೂರ್ತಿರಾವ್ ಹೇಳುತ್ತಾರೆ** ……

"ಪುಸ್ತಕವನ್ನೋದುವಾಗ ನಾವು ಎಲ್ಲೆಂದರೆ ಅಲ್ಲಿಗೆ ನಿಲ್ಲಿಸಿ ಮತ್ತೆ ನಿಲ್ಲಿಸಿದ ಕಡೆಯಿಂದ ಮುಂದುವರಿಸಬಹುದು, ಜೀವನವನ್ನೂ ಹಾಗೇ ನಿಲ್ಲಿಸಿದ ಕಡೆಯಿಂದ ಅದೇ ದಾರಿಯಲ್ಲಿ ಮುಂದುವರಿಸಲಾದೀತೆ ? ಜೀವನವು ನಾವು ನಿಲ್ಲಿಸಿದ ಕಡೆ ನಿಂತಿರುವುದಿಲ್ಲ"

"ನೀತಿ ಶಾಸ್ತ್ರ ಮನಸ್ಸನ್ನ ಮುಟ್ಟೀತು ಹೃದಯವನ್ನಲ್ಲ. ಅಂದರಿಂದಾಗುವುದು ಬುದ್ಧಿ ವಿಕಾಸ, ಭಾವ ವಿಕಾಸವಲ್ಲ. ಸಾಹಿತ್ಯಕ್ಕೂ ಇತರ ಜ್ಞಾನ ಸಾಧನೆಗಳಿಗೂ ಇರುವ ವ್ಯತ್ಯಾಸವೆಂದರೆ ಇದೇ"

"ಮನುಷ್ಯ ಕಾರ್ಯೋನ್ಮುಖನಾಗಬೇಕಾದರೆ ಬಹುಮಟ್ಟಿಗೆ ವಿಚಾರ ಶಕ್ತಿಗಿಂತಾ ಭಾವ ಶಕ್ತಿಯಿಂದ"

---

# ಎರೆಹುಳ

**ಸ್ವಾಮಿನಾಥ**
ನಂ. 22/33 ಸರ್ವೆಯರ್ ರಸ್ತೆ, ಬಸವನಗುಡಿ, ಬೆಂಗಳೂರು 4

ಕೆಂಪು ಮಣ್ಣಿನ
ಕತ್ತಲಿನ ಬಿಲದಲ್ಲಿ
ಕಕ್ಕಸ ಬಿಡುತ್ತ ನೆಲದಲ್ಲಿ
ತೆವಳುತ್ತ ಉಚ್ಚೆಯ ರೊಚ್ಚಲ್ಲಿ
ಇದ್ದು ಬಿಡುತ್ತದೆ ಎರೆಹುಳ
ಗಪ್ಪೆನ್ನುವ ತನ್ನದೇ ನಾತದಲ್ಲಿ
ಇಷ್ಟಾದರೂ ಮೆಕ್ಕುತ್ತ ಸುತ್ತಲಿನ ಮಣ್ಣು
ಮರಕುಟಿಗನ ಹೊಳಪು ಕಣ್ಣು
ಕುಕ್ಕಿತೆಗೆದು ಮರಿಯ ಬಾಯಿಗೆ ಹಣ್ಣು
ಕತ್ತಲಿನ ಕಾಡಲ್ಲಿ
ಇರುವೆಗೆರವಾದರೂ
ಇರುವವರು ಯಾರು ?
ತನ್ನ ತಾನೇ ತನ್ನಂತೆ
ಕಣ್ಣಿಗಾಗಿ ಉಬ್ಬಸ ಬಿಡುವ ರೋಗಿ.
ತೆರೆದಂತೆ ಮಣ್ಣಿನ ಪದರ ಪದರ
ಸೂರ್ಯನ ಹಸಿ ಬಿಸಿಗೇ ಹತಾಶನಾಗಿ
ಬೆಳಕು ಬೇಡವೆಂದರಚುತ್ತ
ಚೂಪು ಬಾಯಿಂದ
ಮೆದು ಮಣ್ಣಿಗಾಗಿ ತಡಕುತ್ತ
ಸಿಕ್ಕಿದೊಡನೆಯೇ ಸೇರಿಬಿಡುತ್ತದೆ
ಮತ್ತೆ ಕತ್ತಲ ಬಿಲ
ಇರಬಹುದೆ, ಕತ್ತಲೆಯೆ
ನಿನ್ನ ಬಿಲ ? ಎರೆಹುಳ !

# "ಸಂಜೆಗಣ್ಣಿನ ಹಿನ್ನೋಟ" – ಒಂದು ಪರಿಚಯ

**ಎಸ್. ಎಸ್. ರಮೇಶ್, ಎಂ.ಎ.**
ಕನ್ನಡ ಉಪನ್ಯಾಸಕರು
ಶ್ರೀ ರಾಮಕೃಷ್ಣ ವಿದ್ಯಾ ಶಾಲಾ
ಮೈಸೂರು–570 020

ನಾಡಿನ ಹಿರಿಯ ಸಾಹಿತಿಗಳಲ್ಲಿ ಒಬ್ಬರಾದ ಪ್ರೊ. ಎ. ಎನ್. ಮೂರ್ತಿರಾವ್ ಅವರ, ಆತ್ಮಕಥೆ 'ಸಂಜೆಗಣ್ಣಿನ ಹಿನ್ನೋಟ', ಮೌಲಿಕವಾದ ಕೃತಿ. ದೀರ್ಘಕಾಲ ವಿಶ್ವವಿದ್ಯಾನಿಲಯದ ಮಟ್ಟದಲ್ಲಿ ಇಂಗ್ಲಿಷನ್ನು ಬೋಧಿಸಿರುವ ಎ. ಎನ್. ಮೂರ್ತಿರಾವ್ ಅವರು ಕನ್ನಡ ಮತ್ತು ಸಂಸ್ಕೃತ ಸಾಹಿತ್ಯಗಳನ್ನು ಆಳವಾಗಿ ಅಭ್ಯಸಿಸಿದವರು. ಹಾಸ್ಯಪ್ರಜ್ಞೆಯ ಮೂರ್ತಿರಾಯರು ಸಂಗೀತ ಪ್ರೇಮಿಗಳೂ ಹೌದು.

'ಸಂಜೆಗಣ್ಣಿನ ಹಿನ್ನೋಟ'ದ ಅಧ್ಯಯನ ಹಲವು ರೀತಿಗಳಲ್ಲಿ ಸಾಧ್ಯ. ಈ ಕೃತಿಯನ್ನು ಓದುತ್ತಿರುವಾಗ, ಲೇಖಕರ ಆಳವಾದ ಅನುಭವ, ಪ್ರಾಮಾಣಿಕತೆ, ಸ್ಪಷ್ಟವಾದ ವಿಚಾರಗಳು ಹಂತ ಹಂತವಾಗಿ ವ್ಯಕ್ತವಾಗುತ್ತಿರುತ್ತದೆ. ಎ. ಎನ್. ಮೂರ್ತಿರಾವ್ ಅವರ ಇತರ ಕೃತಿಗಳ ನಡುವೆ 'ಸಂಜೆಗಣ್ಣಿನ ಹಿನ್ನೋಟ' ವಿಶೇಷವಾಗಿ ಅವರ 'ಚಿತ್ರಗಳು–ಪತ್ರಗಳು' ಮತ್ತು 'ಅಪರ ವಯಸ್ಕನ ಅಮೇರಿಕಾ ಯಾತ್ರೆ' ಕೃತಿಗಳ ನಡುವೆ ಇಟ್ಟು ನೋಡಿದಾಗ ಕನ್ನಡದಲ್ಲಿ ಇಲ್ಲಿಯವರೆಗೆ ಬಂದಿರುವ ಶ್ರೇಷ್ಠ ಆತ್ಮ ಕಥೆಗಳ ನಡುವೆ ಒಂದು ವಿಭಿನ್ನವಾದ ಪ್ರಯೋಜನಕರವಾದ ಅಧ್ಯಯನವಾಗುತ್ತದೆ.

ಆಧುನಿಕ ಕನ್ನಡ ಭಾಷೆಯಲ್ಲಿ ಸೊಗಸಾದ ಗದ್ಯಕ್ಕೆ ಪ್ರಮುಖ ಹೆಸರುಗಳಲ್ಲಿ ಮೂರ್ತಿರಾವ್ ಅವರದ್ದೂ ಒಂದು. ಮೂರ್ತಿರಾವ್ ಅವರು ತಮ್ಮ ಮುನ್ನುಡಿಯಲ್ಲಿ ಹೀಗೆ ಹೇಳುತ್ತಾರೆ :

"ನಾನು ಬರೆಯುತ್ತಿರುವುದು ಯಾವ ಜಾತಿಯವನಾಗಿಯೂ ಅಲ್ಲ ; ಯಾವ ಜನಾಂಗ ವೃತ್ತಿ, ಅಥವಾ ಮತದವನಾಗಿಯೂ ಅಲ್ಲ ಕೇವಲ ಸಾಮಾನ್ಯ ಮಾನವನಾಗಿ" ಬ್ರಾಹ್ಮಣ ಪರಿಸರದಲ್ಲಿ ಹುಟ್ಟಿ, ಬೆಳೆದು ಅದರ ರೀತಿ–ನೀತಿಗಳನ್ನು ಸುಮ್ಮನೆ ಒಪ್ಪಿಗೆ ಕೊಟ್ಟು ನಡೆಯುವ ಸ್ವಭಾವ ಮೂರ್ತಿರಾಯರದು ಅಲ್ಲ. ಹಾಗೆಯೇ ಆವೇಶ ಬಂದವರ ಹಾಗೆ ತಿರಸ್ಕಾರದ ಮಾತುಗಳನ್ನು ಆಡುವವರೂ ಅಲ್ಲ. ಸಮಾಧಾನವಾಗಿ

ಚಿಂತಿಸಿ, ರೀತಿ–ನೀತಿಗಳ ಹಿಂದೆ ಅಡಗಿರುವ ವಿಚಾರಗಳು ಎಷ್ಟರ ಮಟ್ಟಿಗೆ ವಿಚಾರ ಪೂರ್ಣವಾದದ್ದು ಎಂದು ಯೋಚಿಸಿ ನಿರ್ಧಾರಕ್ಕೆ ಬರುವ ಸ್ವಭಾವ. ವಿಚಾರಗಳನ್ನು ಮಂಡಿಸುವಾಗ ಇನ್ನೊಬ್ಬರೂ ಒಪ್ಪಲೇಬೇಕು ಎಂಬ ಒತ್ತಾಯ ಇಲ್ಲ. ಬದಲಿಗೆ ಗಂಭೀರ ಸಂವಾದಕ್ಕೆ ಆಹ್ವಾನಿಸುವ ರೀತಿ ಅವರದ್ದು.

ಮೂರ್ತಿರಾಯರು ಈ ಕೃತಿಯ ಉದ್ದಕ್ಕೂ ಪ್ರಾಮಾಣಿಕತೆ ಜಾರದ ಹಾಗೆ ಎಚ್ಚರ ವಹಿಸಿದ್ದಾರೆ. ಒಂದು ಕಡೆ ಹೀಗೆ ಹೇಳುತ್ತಾರೆ. "ಆದರ್ಶೀಕರಣ ಸಲ್ಲದು ಯಾವ ವಿಷಯದಲ್ಲಾಗಲಿ ದೃಷ್ಟಿಯನ್ನು ಸ್ವಚ್ಛವಾಗಿಟ್ಟುಕೊಳ್ಳಬೇಕು' ಎಂದು ಎಚ್ಚರಿಕೆ ಹೇಳಿಕೊಳ್ಳುತ್ತಲೇ ಇರುತ್ತೇನೆ". ಏಕೆಂದರೆ, ಆತ್ಮಕಥೆಗಳ ಅತಿ ದೊಡ್ಡ ದೋಷ ಎಂದರೆ, ಅಪ್ರಾಮಾಣಿಕತೆ ಓದುಗರ ಮೆಚ್ಚುಗೆಗಳಿಸುವ ಉದ್ದೇಶದಿಂದ ತಮ್ಮ ವಿಚಾರಗಳನ್ನು ತಿರುಚಿ ಹೇಳುವ ಆತ್ಮ ಚರಿತ್ರೆಗಳಿವೆ. ಮಾನವೀಯತೆಗೆ ವಿಶೇಷ ಒತ್ತು ಕೊಡುವ ಮೂರ್ತಿರಾವ್ 'ಮಠಾಧಿಪತಿಗಳು' ಎಂಬ ಶಿರೋನಾಮದಡಿಯಲ್ಲಿ ಹೀಗೆ ಹೇಳುತ್ತಾರೆ :

"ಪ್ರೌಢಕನ್ಯಾ ವಿವಾಹವೂ ವಿಧವಾ ವಿವಾಹವೂ ಶಾಸ್ತ್ರಸಮ್ಮತವೇ ಅಲ್ಲವೇ ಎಂಬುದನ್ನು ನಾನು ಸ್ವತಃ ಶಾಸ್ತ್ರಾಧ್ಯಯನ ಮಾಡಿ ಖಚಿತಪಡಿಸಿಕೊಂಡಿಲ್ಲ. ಅವು ನಿಷಿದ್ಧ ಎಂದು ಹೇಳುವ ಶಾಸ್ತ್ರಭಾಗವೊಂದಿದ್ದರೆ ಅದಕ್ಕೆ ಬೆಲೆ ಕೂಡ ಬೇಕಾದ್ದಿಲ್ಲ ಎನ್ನುವವನು ನಾನು. ಶಾಸ್ತ್ರಗಳನ್ನು ರಚಿಸಿದವರು ನಮ್ಮಂತೆ ಮಾನವರು ತಾನೆ! ಅವುಗಳಲ್ಲಿ ಕಂಡುಬರುವ ಕೆಲವು ಅಭಿಪ್ರಾಯಗಳು ಬರೆದ ಕಾಲದಲ್ಲಿ ತಪ್ಪಾಗಿದ್ದಿರುವುದು ಸಾಧ್ಯ ; ಅಥವಾ ಆಗ ಸರಿಯಾಗಿದ್ದರೂ ಇಂದಿನ ಸಮಾಜಹಿತದ ದೃಷ್ಟಿಯಿಂದ ಸರಿಯಲ್ಲದಿರಬಹುಧು. ಶಾಸ್ತ್ರಗಳನ್ನು ಬರೆದ ಗಂಡಸು, ಸಮಸ್ಯೆಯನ್ನು ಹೆಣ್ಣಿನ ದೃಷ್ಟಿಯಿಂದ ನೋಡಿಲ್ಲದಿರಬಹುದು – ನೋಡಲಿಲ್ಲ ಎಂದೇ ಸ್ಪಷ್ಟವಾಗಿ ಹೇಳಬಹುದು". (ಪುಟ 48)

'ಸಂಜೆಗಣ್ಣಿನ ಹಿನ್ನೋಟ'ದಲ್ಲಿ ಹತ್ತು ಹಲವು ವಿಷಯಗಳನ್ನು ಕುರಿತ ಹಾಗೆ ಗಂಭೀರ ಚಿಂತನೆಗಳಿವೆ. ಇದಕ್ಕೆ ಕಾರಣ ಮೂರ್ತಿರಾವ್ ಅವರ ವಿಶಾಲವಾದ ಓದು, ಮತ್ತು ಜೀವನಾನುಭವ ಪಾಶ್ಚತ್ಯ ಸಮಾಜವನ್ನು ನಮ್ಮಲ್ಲಿ ಅನೇಕರು ಹೆಚ್ಚಿನ ಮಟ್ಟದಲ್ಲಿ ಮೆಚ್ಚುತ್ತಾರೆ. ಮೂರ್ತಿರಾಯರು ಒಂದು ಘಟನೆ ಪ್ರಸ್ತಾಪಿಸುತ್ತಾರೆ. ತಾವು ಬಿ.ಎ. ಕೊನೆಯ ತರಗತಿಯಲ್ಲಿದ್ದಾಗ, ಅವರ ತಂದೆ ನಿಧನರಾಗುತ್ತಾರೆ. ಆಗ ಸಂಸಾರದ ಹೊರೆ ಸಹಜವಾಗಿ ಅವರಿಗೆ ಬೀಳುತ್ತದೆ. ಈ ಬಗ್ಗೆ ಅವರು ಹೇಳುತ್ತಾರೆ ; "ಈ ಜವಾಬ್ದಾರಿಯನ್ನೆಲ್ಲ ಸಾಧ್ಯವಾದ ಮಟ್ಟಿಗೆ ಕಳಚಿಕೊಂಡು ನನ್ನ ಪಾಡಿಗೆ ನಾನಿರಬೇಕು. ನನ್ನ ಬದುಕು ನನ್ನದು" ಎಂಬ ಯೋಚನೆ ನನ್ನ ಮನಸ್ಸಿಗೆ ಬರಲಿಲ್ಲ. ಇದನ್ನು ಹೇಳುತ್ತಿರುವುದು ನನ್ನ ದೊಡ್ಡತನವನ್ನು ಕೊಚ್ಚಿಕೊಳ್ಳುವುದಕ್ಕಲ್ಲ ; ನಮ್ಮ ಸಂಸ್ಕೃತಿಯಲ್ಲಿ

ಎಷ್ಟೋ ಶತಮಾನಗಳ ಕಾಲ ಜೀವಂತವಾಗಿ ನೆಲೆಸಿರುವ ದೊಡ್ಡತನವನ್ನು ಎಲ್ಲರ ಗಮನಕ್ಕೂ ತರಲೆಂದು. ನನಗೆ ಒದಗಿಬಂದಂಥ ಸಂದರ್ಭ ಬಂದಾಗ ನಮ್ಮ ಸಮಾಜ ದಲ್ಲಿ ಯಾರಿಗೇ ಆಗಲಿ ಜವಾಬ್ದಾರಿಯನ್ನು ತಪ್ಪಿಸಿಕೊಂಡು ಓಡಿಹೋಗಬೇಕು ಎಂಬ ಯೋಚನೆ ಮುಂದಾಗುವುದು ಅಪರೂಪ. ಪಶ್ಚಿಮ ದೇಶಗಳ ಜನರೆಲ್ಲ ಸ್ವಾರ್ಥಿಗಳು, ಹೃದಯ ಶೂನ್ಯರು. The Devil take the hind most (ಹಿಂದುಳಿದವರು ಸೈತಾನನ ಪಾಲು) ಎಂಬುದೇ ಅವರ ಜೀವನ ಸೂತ್ರ – ಎಂದು ನಾನು ಸೂಚಿಸುತ್ತಿಲ್ಲ. ಅವರ ಸಮಾಜದಲ್ಲಿ ವ್ಯಕ್ತಿ ಹಿತಕ್ಕೆ ಪ್ರಾಧಾನ್ಯ ಹೆಚ್ಚು". (ಪುಟ 178)

ಪ್ರೊ. ಎ. ಎನ್. ಮೂರ್ತಿರಾವ್ ಅವರ 'ಆತ್ಮ ಕಥೆ' ಒಂದು ಬಾರಿ ಓದಿ ಮುಗಿಸಿ ಇಡುವ ಪುಸ್ತಕವಲ್ಲ. ಒಂದು ಸಾಂಸ್ಕೃತಿಕ ಪರಿಸರದ ಹುಳುಕುಗಳನ್ನ, ಒಳ್ಳೆಯ ಅಂಶಗಳನ್ನ ಯೋಚಿಸಿ ತೆರೆದಿಡುವ ಪ್ರಬುದ್ಧ ದೃಷ್ಟಿಕೋನ ಅವರ ಬರಹಗಳ ಹಿಂದೆ ಕೆಲಸ ಮಾಡುತ್ತಿರುತ್ತದೆ.

ಮೂರ್ತಿರಾಯರು ಆತ್ಮ ವಿಮರ್ಶೆಯ ಜೊತೆಗೆ ಸ್ವಂತಿಕೆಯನ್ನು ಉಳಿಸಿಕೊಂಡು, ವಿಭಿನ್ನ ವ್ಯಕ್ತಿಗಳ ಸಂಗಡ ಸಮಾಜದಲ್ಲಿ ಹೇಗೆ ವರ್ತಿಸಿದರು, ತಮ್ಮೆಲ್ಲಾ ಮಿತಿಗಳಲ್ಲಿ ಹೊಸದರ ಬಗ್ಗೆ ಹೇಗೆ ಯೋಚಿಸಿದರು.... ಹೀಗೆ ಹಲವು ರೀತಿಯ ವಿಚಾರಗಳನ್ನು ಕುರಿತು ವಿಭಿನ್ನ ದೃಷ್ಟಿಗಳಿಂದ 'ಸಂಜೆಗಣ್ಣಿನ ಹಿನ್ನೋಟ ಕಾಣಲು ಸಾಧ್ಯ. ಉತ್ತಮ ಅಭಿರುಚಿ ; ಮಾನವೀಯತೆಗೆ ಒತ್ತು ಕೊಡುವ ಮೂರ್ತಿರಾವ್ ಅವರ ಬರಹಗಳು ಇಂದಿನ ಓದುಗರಿಗೆ ಅವಶ್ಯವಾಗಿ ಬೇಕು.

'ಸಂಜೆಗಣ್ಣಿನ ಹಿನ್ನೋಟ' ಬಹು ವಿಶಾಲ ಅನುಭವದ ವ್ಯಾಪ್ತಿ ಹೊಂದಿರುವ ಕೃತಿ. ಇದರ ಬಗ್ಗೆ ದೀರ್ಘವಾದ ಅಧ್ಯಯನಗಳು ನಡೆಯಬೇಕು. ಒಟ್ಟು ಕನ್ನಡ ಸಾಹಿತ್ಯದಲ್ಲೇ ಶ್ರೀ ಮೂರ್ತಿರಾವ್ ಅವರ ಬರಹಗಳಿಗೆ ವಿಶಿಷ್ಟ ಸ್ಥಾನವಿದೆ.

---

ಒಲುಮೆಗಿಂತಲು ಬೇರೆ ಪರಮಾರ್ಥವಿನ್ನಿಲ್ಲ
ನರರ ಬದುಕಿನಲ್ಲಿ ಮೆಣರ್ಥ ಹೀನಂ ಬಾಳ್ಮೆ
ಒಲುಮೆ ಇಲ್ಲದಿರೆ — **ಕುವೆಂಪು**

---

# ರಕ್ಷಕ

ಮಲಯಾಳಿ ಮೂಲ : **ಒ. ಎನ್. ವಿ. ಕುರುಪ್**
ಕನ್ನಡಕ್ಕೆ : **ಶ್ರೀಧರ ಪಿಸ್ಸೆ**

ಹೇಗೆ ಬರುವನೊ ಏನೊ
ಎಂದು ತರುವನೊ ಏನೊ
ಖಾಲಿ ಹೊಟ್ಟೆಗೆ ಬಟ್ಟೆ
ಹೊರುವನೇನು ?

ಸಾಸಿವೆ ಸಾಸಿರ ಹೆಸರು ಏನೊ
ತಿಳಿಯಲಾರೆವು ನಿನ್ನ ನಿಜನಾಮವನ್ನು
ಅರಿಯಲಾರೆವು ನಿನ್ನ ಮೊಗ ಭಾವವನ್ನು
ಕಂಡರಿಯೆವು ನಿನ್ನ ಹೆಜ್ಜೆ ಗುರುತುಗಳನ್ನು
ಹೊಸತು ಅವತಾರ ಹೊತ್ತು ಬರುವೆಯೆಂದು
ಕಾದಿರುವೆವು ನಾವು ದೀನ ಯಾವಾಗಲೂ

ಹೇಗೆ ಬರುವನೊ ಏನೊ
ಎಂದು ತರುವನೋ ಏನೋ
ಖಾಲಿ ಹೊಟ್ಟೆಗೆ ಬಟ್ಟೆ
ಹೊರುವನೇನು ?

ನಿನ್ನ ಬಣ್ಣವದು ಏನು ? ಹೇಗಂತೆ ಅಣ್ಣ ?
ಅದು ನೀಲಿ ಹೂವಂತೆ ? ಬೆಣ್ಣೆಯಂತೆ ?
ನಮಗೆ ತಿಳಿಯದೊ ಅಣ್ಣ
ನಿನ್ನ ಮೊಗವದು ಹೇಗೊ ತಿಳಿಯದೊ
ನಿನ್ನ ದನಿಯದು ಹೇಗೊ ತಿಳಿಯದು
ದಲ್ಲಾಳಿ ದೀವಾಳಿ ಯಾವಾಗಲೂ ನಾವು
ಕಾದಿರುವೆವು ನೀನು ಬರುವೆಯೆಂದು

ಹೇಗೆ ಬರುವೆಯೋ ಏನೊ
ಎಂದು ತರುವೆಯೊ ಏನೊ
ಖಾಲಿ ಹೊಟ್ಟೆಗೆ ಬಟ್ಟೆ
ಹೊರುವೆಯೇನು ?

ನಿನ್ನ ವಸನವದು ಏನು ? ಹೇಗಂತೆ ಚೆಂದ ?
ರೇಷಿಮೆ ಹತ್ತಿಯೊ ? ಎಲೆ ಬಳ್ಳಿ ಚರ್ಮವೊ ?
ಅದು ಏನೊ ಅರಿಯೆವು
ಮುಂಗೈ ಮುಂದಕ್ಕೆ ಉಗುರು ಹಚ್ಚಿ ?
ಕೋಲು ಕೋಲಿನ ಕೊಳಲು ನಿನ್ನ ಕೈಯಲ್ಲೆ ?
ಹೇಗಾದರೂ ಸರಿಯೆ ಮೈದೋರಿ ನಮ್ಮಲ್ಲಿ
ಹುಚ್ಚೆದ್ದು ನಮ್ಮೊಳಗೆ ಬರುವನವನು
ಆ ರಕ್ಷಕನಿಗಾಗಿ ನಾವು ಇಹೆವು

ಹೇಗೆ ಬರುವೆಯೊ ಏನೊ
ಎಂದು ತರುವೆಯೊ ಏನೊ
ಖಾಲಿ ಹೊಟ್ಟೆಗೆ ಬಟ್ಟೆ
ಹೊರುವೆಯೇನು ?

---

ಪರರ ಕೃತಿಗಳಿಂದ ಮುಚ್ಚು ಮರೆಯಿಲ್ಲದೆ ತೆಗೆದುಕೊಂಡು
ಹೊಸ ಮೆರಗನ್ನು ತನ್ನ ಪ್ರತಿಭೆಯಿಂದ ಅಳವಡಿಸಿಕೊಳ್ಳುವುದು ಹರಣವಲ್ಲ ;
ಸ್ವೀಕರಣ, ಅದನ್ನ ಮಾಡದ ಕವಿಯೇ ಇಲ್ಲ.

**– ತೀ. ನಂ. ಶ್ರೀ.**

---

# "ಹತ್ತು ವರ್ಷದ ಅಭಿನಯ ತರಂಗ"

–ಎಂ. ವಿ. ವಿೂರ
ನಂ. 49, 1ನೇ ಕ್ರಾಸ್, 4ನೇ ಬ್ಲಾಕ್, ತ್ಯಾಗರಾಜನಗರ ಬೆಂಗಳೂರು–28

ಹನುಮಂತನಗರದ ಆನಂದ ಮಿಲನಾದ್ರಿ ಗುಡ್ಡಕ್ಕೆ ಅಂಟಿದಂತಿರುವ ಕಲಾಮಂದಿರ ಅನೇಕ ಚಟುವಟಿಕೆಗಳ ಕೇಂದ್ರ. ಇದರೊಳಗೆ ಕಾಲಿಟ್ಟೊಡನೆ ಅಲ್ಲಿಯ ಬೇರೆ ಬೇರೆ ಚಟುವಟಿಕೆಗಳು ನಿಮ್ಮ ಗಮನ ಸೆಳೆಯುತ್ತದೆ. ಮಾಮೂಲಿ ಶಾಲೆ ಕ್ಲಾಸು ಕೋರ್ಸು ಗಳಿಗಿಂತಾ ಭಿನ್ನವಾದ ಎಲ್ಲ ವಯಸ್ಸಿನ ಉತ್ಸಾಹಿಗಳಿಗೂ ಕಲೆಯ ಬಗೆಗಿನ ಆಸಕ್ತರಿಗೂ ಬೆಳೆಯಲು ಅವಕಾಶವಿರುವ ಸ್ಥಳ, ತಮ್ಮ ವೃತ್ತಿಯ ಗಡಿಬಿಡಿ ದಿನಚರಿಗಳ ಜೊತೆಗೆ ಕಲೆಯನ್ನೂ ಬದುಕಿನ ಭಾಗವಾಗಿಸಿಕೊಳ್ಳುವ ಯತ್ನಕ್ಕೆ ಇಲ್ಲಿ ಅವಕಾಶವಿದೆ.

ಈಚಿನ ದಿನಗಳಲ್ಲಿ ಬೇರೆಲ್ಲಾ ಕ್ಷೇತ್ರಗಳಂತೆ ಅಭಿನಯ ಕಲೆ ಒಂದು ಶಿಸ್ತು ಬದ್ಧ ಕಲಿಕೆಯಾಗಿ ರೂಪುಗೊಂಡಿದ್ದು. ಪ್ರತಿಭೆಗಳನ್ನ ಗುರುತಿಸಿಕೊಳ್ಳುವ ಅದಕ್ಕಿಂತಲೂ ಹೆಚ್ಚಾಗಿ ರಂಗ ಕಲೆಯ ವಿವಿಧ ಆಯಾಮ ಮತ್ತು ಸಾಧ್ಯತೆಗಳ ಶಿಕ್ಷಣ ಪಡೆಯುವ ಅವಕಾಶಗಳೂ ಕಡಿಮೆಯೇ. ರಂಗ ತರಬೇತಿಗೆ ನಮ್ಮ ಕಣ್ಣೆದುರು ನಿಲ್ಲುವ ದೆಹಲಿಯ ನಾಟಕ ಶಾಲೆ, ಹೆಗ್ಗೋಡಿನ 'ನೀನಾಸಂ'ನಲ್ಲಿಯೋ ಅಥವಾ ಮೈಸೂರಿನ ರಂಗಾಯಣ ದಲ್ಲಿಯೋ ಒಬ್ಬ ಕಲಾವಿದ ಪರಿಣತನಾಗಬೇಕಾಗುತ್ತದೆ. ಈ ರೀತಿಯ ವೃತ್ತಿರಂಗ ಕರ್ಮಿಗಳಿಲ್ಲದೆ ಹವ್ಯಾಸಿಗಳಿಗಾಗಿಯೇ ಮೊಸಲಾದ ಭಾನುವಾರದ ನಾಟಕ ಶಾಲೆ "ಅಭಿನಯತರಂಗ" ಹತ್ತು ವರ್ಷಗಳ ಕೆಳಗೆ 1981ರಲ್ಲಿ ಡಾ॥ ರಾಜೀವತಾರಾನಾಥ್, ಕಿ. ರಂ. ನಾಗರಾಜ್, ಶ್ರೀಮತಿ ವಿಜಯ ಮುಂತಾದ ಅನೇಕರ ಆಶಯದ ಫಲವಾಗಿ ಸಾಮಾನ್ಯನಿಗೂ ರಂಗಭೂಮಿಯನ್ನ ಹತ್ತಿರ ತರುವ ಉದ್ದೇಶದಿಂದ ಆರಂಭವಾಯಿತು. 'ಅಭಿನಯ ತರಂಗ' ನಾಟಕ ಶಾಲೆಯಾಗಿ ರೂಪುಗೊಂಡಾಗ ಇದರ ಪ್ರಾಂಶುಪಾಲ ರಾಗಿದ್ದವರು ಅಶೋಕ ಬಾದರದಿನ್ನಿ ನಂತರ ಹೆಚ್. ಸಿ. ವೆಂಕಟಸುಬ್ಬಯ್ಯ ಮತ್ತು ಪ್ರೊ. ಬಿ. ಸಿ. ಯವರು ಪ್ರಾಂಶುಪಾಲರಾದ ನಂತರ ನಾಟಕಕ್ಕೆ ಸಂಬಂಧಿಸಿದ ಅನೇಕ ಸಂಗತಿಗಳನ್ನ ಪಠ್ಯವನ್ನಾಗಿಸಿ ಪ್ರಯೋಗ ಮತ್ತು ಥಿಯರಿಗಳಾಗಿ ಮಾರ್ಪಾಡಾದವು. ರಂಗ ಶಿಕ್ಷಣ ಪಡೆದ ವಿದ್ಯಾರ್ಥಿಗಳನ್ನ ಸ್ವತಂತ್ರ ಕಲಾವಿದರನ್ನಾಗಿಸುವ. ಪ್ರತಿಭಾ ಪರೀಕ್ಷೆಗಳೂ ರೂಪುಗೊಂಡವು. ಅನೇಕ ಕಲಾವಿದರನ್ನು ಕೊಟ್ಟ ಅಭಿನಯ ತರಂಗ ನಾಟಕ ಅಕಾಡೆಮಿಯಿಂದ ಗುರುತಿಸಲ್ಪಟ್ಟಿದ್ದು ತಡವಾಗಿಯೇ. ಇಲ್ಲಿನ ಅನೇಕ ವಿದ್ಯಾರ್ಥಿಗಳು ಇವತ್ತಿನ ರಂಗಭೂಮಿಯ ಪ್ರಸಿದ್ಧ ನಟನಟಿಯರಾಗಿ ರಂಗವಿನ್ಯಾಸ

ಕಾರರಾಗಿ, ಪ್ರಸಾಧನಕಾರರಾಗಿ, ಬೆಳಕು ತಂತ್ರಜ್ಞರಾಗಿ ನಿರ್ದೇಶಕರಾಗಿಯೂ ಅನೇಕ ನಾಟಕ ತಂಡಗಳಲ್ಲಿ ಸಿನಿಮಾ ದೂರದರ್ಶನಗಳಲ್ಲಿ ಮಿಂಚಿದ್ದಾರೆ.

ಸದ್ದಿಲ್ಲದೆ ತನ್ನ ಕೆಲಸ ಸಡೆಸುತ್ತಾ ಬಂದಿರುವ 'ಅಭಿನಯ ತರಂಗ' ರಂಗ ತಂತ್ರಜ್ಞರು ಪ್ರಸಿದ್ಧ ನಿರ್ದೇಶಕ ನಟರಿಂದ ಉಪನ್ಯಾಸ ಮತ್ತು ಕಮ್ಮಟಗಳನ್ನೂ ನಡೆಸುತ್ತಿದೆ. ನಾಟಕ ಒಂದು ಮುಖಗಳು ಹಲವು ಎನ್ನುವ ವಿಶಿಷ್ಟ ಪ್ರಯೋಗದಲ್ಲಿ ಒಬ್ಬನೇ ನಟ, ವಿವಿಧ ಶೈಲಿಯ ಮಾತುಗಾರಿಕೆ ಮತ್ತು ನಟನೆಗಳನ್ನ ನಾನಾ ರೀತಿಯಲ್ಲೂ ಪ್ರದರ್ಶಿಸುವುದು, ಒಂದು ನಾಟಕ ಶೈಲಿಯಲ್ಲಿ ಬರುವ ರಂಗನಿಯಮಗಳು, ರಂಗಸಜ್ಜಿಕೆ, ಅಭಿವ್ಯಕ್ತಿಯ ರೀತಿ, ಸಂಗೀತಪ್ರಜ್ಞೆ, ಕುಣಿತದ ರೀತಿ, ಸಂಭಾಷಣೆಗಳ ವಿಶಿಷ್ಟತೆಯನ್ನ ಅವುಗಳ ಬೇರೆ ಬೇರೆ ರೀತಿಯ ಪರಿಣಾಮಗಳನ್ನು ಕೂಡಾ ಗುರುತಿಸಿಕೊಳ್ಳುವ, ತಿಳಿದು ಕೊಳ್ಳುವ ಪ್ರಯೋಗ, ಒಬ್ಬ ನಟನಿಗೆ ಅಗತ್ಯವಾದ ಎಲ್ಲ ಶೈಲಿಗಳ ಪರಿಚಯ ಮತ್ತು ಸಾಧ್ಯತೆಗಳು ಅದಕ್ಕಿಂತಲೂ ಮುಖ್ಯವಾಗಿ ರಂಗ ತಂತ್ರಗಳನ್ನ ಕ್ರಿಯಾತ್ಮಕವಾಗಿ ವಿವಿಧ ಶೈಲಿಗಳಲ್ಲಿ ಅಳವಡಿಸುವ ರೀತಿಯನ್ನು ಕಲಿಸಲಾಗುತ್ತದೆ.

ಅಭಿನಯ ತರಂಗದ ಮತ್ತೊಂದು ಯೋಜನೆಯಲ್ಲಿ ನಡೆದ ರಂಗಮುಖೇನ ಶಿಕ್ಷಣದ ಯೋಜನೆಯಲ್ಲಿ ಕಾಲೇಜು ಪಠ್ಯದ ನಾಟಕವನ್ನು ಆಯ್ದುಕೊಂಡು ಒಂದು ತಂಡ ತಯಾರಾಗಿ ಕಾಲೇಜಿನಿಂದ ಕಾಲೇಜಿಗೆ ಆ ನಾಟಕ ಅಭಿನಯಿಸುತ್ತಿತ್ತು. ನಾಟಕದ ನಿರ್ದೇಶಕ ಮತ್ತು ವಿದ್ಯಾರ್ಥಿಗಳ ನಡುವೆ ಸಂವಾದದ ಜೊತೆಗೆ ವಿದ್ಯಾರ್ಥಿಗಳಲ್ಲಿ ನಾಟಕವನ್ನು ಕುರಿತು ಅರಿವು ಮೂಡಿಸುವಲ್ಲಿ ಸಹಾಯಕವಾಗಿತ್ತು ಎನ್ನುವ ಎ. ಎಸ್. ಮೂರ್ತಿಯವರ ಮಾತು ನಿಜವೆನಿಸುತ್ತದೆ.

'ಅಭಿನಯ ತರಂಗ' ಬೆಳೆದಿರುವುದು ಒಂಟಿಯಾಗೇನಲ್ಲ. ಜೊತೆಜೊತೆಗೆ ಚಿತ್ರ,ಬಿಂಬ, ಕಲಾಮಂದಿರ, ಪಪೆಟ್‌ಲ್ಯಾಂಡ್ ಮುಂತಾದವು ಕ್ರಿಯಾಶೀಲವಾಗಿದೆ. ಇಲ್ಲಿನ ನಾಟಕ ಶಾಲೆಗೆ ಅದರ ಪ್ರಾಂಶುಪಾಲರಾದ ಪ್ರೊ. ಬಿ. ಚಂದ್ರಶೇಖರ್, 75 ವಯಸ್ಸು ತುಂಬಿದರೂ ಅದರ ಚಟುವಟಿಕೆಯ ಕೇಂದ್ರವಾಗಿದ್ದರೆ ಅಭಿನಯ ತರಂಗ ಇವತ್ತಿನ ರಂಗಭೂಮಿಗೆ ತನ್ನದೇ ಆದ ವಿಶೇಷ ಬಗೆಯ ಹಲವಾರು ನಾಟಕಗಳನ್ನು ಕೊಟ್ಟಿದೆ. ಪ್ರೊ. ಬಿ. ಸಿ. ನಿರ್ದೇಶನದ 'ಪಂಚರಾತ್ರ' 'ಸಿದ್ದು ವಿಚಾರಣೆ' ಸುಧೀಂದ್ರ ಶರ್ಮರ 'ಆಷಾಢದ ಒಂದು ದಿನ' ಬಿ. ಸುರೇಶ್ ನಿರ್ದೇಶಿಸಿದ 'ಉಳ್ಳವರ ನೆರಳು' 'ಕಿಂಗ್‌ಲಿಯರ್' ಚಂದ್ರು ನಿರ್ದೇಶಿಸಿದ 'ಲಿಯರ್' ಜನ್ನಿ ನಿರ್ದೇಶಿಸಿದ 'ಜಾಕ್ ಸರ್ಕಲ್' ಹೀಗೆ ಹತ್ತಾರು ನಾಟಕಗಳು ಹಲವಾರು ಪ್ರದರ್ಶನಗಳನ್ನ ಕಂಡಿದೆ.

ಹತ್ತು ವರ್ಷ ತುಂಬಿದ ಈ ಸಂದರ್ಭದಲ್ಲಿ ಅಭಿಯ ತರಂಗದ ಎಲ್ಲ ಚಟುವಟಿಕೆ ಗಳು ಇನ್ನಷ್ಟು ಅರ್ಥಪೂರ್ಣವಾಗಿ ಬೆಳೆಯಲಿ ಹೊಸ ಗಟ್ಟಿ ಕಲಾವಿದರನ್ನ ಬೆಳಕಿಗೆ ತರಲಿ ಎಂದು ಸಂಚಯ ಕೂಡಾ ಹಾರೈಸುತ್ತದೆ.

# ಕೋಗಿಲೆಗಳು

ಟಿ. ಎಂ. ಷಡಕ್ಷರಿ
ಒಳ ರೋಗಿಗಳ ವಿಭಾಗ, ಜನರಲ್ ಆಸ್ಪತ್ರೆ, ತಿಪಟೂರು–572202

ಕೋಗಿಲೆಗಳು ಹಾಡುವುದೆಲ್ಲಾ
ಹರುಷದ ಹಾಡಲ್ಲ.

ಸತ್ಯ ನೇರವಾಗಿ ಮುಖಕ್ಕಿಡಿವ ಬದಲು
ಸಂಕೇತ ಭಾಷೆಯ, ಸಂಗೀತ ಲೇಪ ಬಳಿದು
ಎದೆ ಅಳಲ ತೋಡುತ್ತವೆ ;
ಬಣ್ಣ ಕಟ್ಟಿ ಹಾಡುತ್ತವೆ, ತಮ್ಮೊಡಲ ಕಿಚ್ಚಿಗೆ.

ಇದ್ದೂ ಇಲ್ಲದ ಒಂಟಿತನವ
ಅರಿವಿದ್ದೂ, ಬಾಯ್ ಬಿಡಲಾಗದ ನೋವ
ಬೆಕ್ಕುಗಳ ಮಧ್ಯೆ ಗಿಳಿಯಂತೆ,
ಹದ್ದುಗಳ ಮಧ್ಯೆ ಪಾರಿವಾಳಗಳಂತೆ
ಮೈಯಲ್ಲಾ ಎಚ್ಚರಾಗಿದ್ದರೂ
ತುತ್ತಾಗುವ ಭಯಕ್ಕೆ ಬೆಚ್ಚಿ
ಎಟುಕದಾಸೆಯ ಕನಸ ಗೋಪುರಕ್ಕೆ
ನೂಲೇಣಿ ಹಾಕುತ್ತವೆ : ಹಾಡುಗಳಲ್ಲೇ

ಕಾಗೆ ಮೈಕಾವ ಪಡೆದು, ಗುಟುಕ
ಕಾಗೆ ಮನೆಯಲಿ ಬೆಳೆದರೂ
ಸ್ವಂತಿಕೆ ಬಿಡದ ಇವುಗಳ ಅಭಿಮಾನಕ್ಕೆ
ಕೆಂಗಣ್ಣಾಗುತ್ತವೆ, ಕಾಗೆ, ಗೂಬೆ, ಗಿಡುಗಗಳು.

ತುತ್ತುಂಡ ಮಾತ್ರಕ್ಕೆ, ತೊತ್ತಾಗಬೇಕೆಂಬುದು
ಯಾವ ನ್ಯಾಯ ?

ಕುಕ್ಕಿ ಹೊರದಬ್ಬಿದರೂ
ಹಾಡುತ್ತವೆ : ಸ್ವಂತಿಕೆಯ ಬಿಂಕವ ಕಿಂಚಿತ್ತೂ ಬಿಡದೆ.

ಹಾಡುತ್ತವೆ ಮುಂಜಾನೆ ಸಂಜೆಯು
ಮುಸುಕು ಮರೆಯಲಿ
ಯಾಕೆಂದರೆ :
ಇಲ್ಲಿ ಬದುಕುವುದು ಮುಖ್ಯವೆಂದರಿತಾಗ
ಹಾಡಿನ ನೆಪದಲ್ಲಿ ತಮ್ಮಳಲ ತೋಡುತ್ತವೆ.

---

## ಗೆಳತಿಗೆ

---

**ನಾರಾಯಣಸ್ವಾಮಿ ಕೆ. ವೈ.**
C/o 'ಸಂಚಯ' ಬೆಂಗಳೂರು–3

ಗಳತಿ
ಕಾಲ ಬುಡ ಮಾಡಿ
ಕನಸುಗಳ ಹದ ಮಾಡಿ
ಕಟ್ಟುತ್ತಿರುವೆ ನೀನು ಕಾಗೆ ಗೂಡು
ಯಾವ ಚಣವಲ್ಲಿ ಹದ್ದು
ಹಾರಿ ಬಂದು ಒದ್ದುರುಳಿಸುವುದೋ
ನಿನ್ನ ಮಾಡು.
ಒಮ್ಮೆ ಯೋಚನೆ ಮಾಡು
ನನ್ನ ಎದೆಯಲ್ಲಿ ಮನೆ ಕಟ್ಟುವಷ್ಟು ಬಯಲಿದೆ
ಸುತ್ತಲು ಹರಿನ ರಕ್ತ ಮಡುವಿಗೆ
ಇಲ್ಲಿ ಯಾವ ಹದ್ದುಗಳು ಹಾರಿ ಬರಲಾರವು
ಯಾವ ಕ್ರೂರ ಮೃಗಗಳೂ ವಾಸಿಸಲಾರವು
ಒಮ್ಮೆ ಯೋಚಿಸಿ ನೋಡು
ನೀನೊಪ್ಪಿದರೆ :
ನನ್ನ ಎದೆಯಲ್ಲಿ ಮನೆ ಮಾಡು

# ಮುಗಿಸುವ ಮುನ್ನ ..

ಇಂಥದ್ದೇ ಕೆಲವು ಕಪ್ಪನೆಯ ರಾತ್ರಿಗಳಲ್ಲಿ ಬೆಂಗಳೂರು ತನ್ನ ಮುಖವಾಡಗಳನ್ನ ಕಳಚಿಡುತದೆ ಅನಾಥವಾಗಿ ನಮ್ಮತನಗಳು ಸುರುಳಿ ಬಿಚ್ಚಿಕೊಳ್ಳಲು ಆರಂಭಿಸುತ್ತದೆ; ಯಂತ್ರದಂಥಾ ನಗರದ ನಾಗರೀಕತೆ ಧಾವಂತಗಳು ಯೋಚಿಸಲು ಕೂಡಾ ಪುರುಸೊತ್ತು ಕೊಡದ ಹಾಗೆ ನಮ್ಮ ದಿನಗಳಿಗೆ ಧಾಳಿ ಮಾಡುತ್ತವೆ. ಸಾಫಾಗಿಸುತ್ತವೆ. ನಿತ್ಯವೂ ವಸ್ತುನಿಷ್ಠ ವಿಷಯಗಳನ್ನ ನೀಡದ, ಹಾಡಿದ್ದೇ ಹಾಡಿ ನಮ್ಮ ಇಡೀ ಮನಸ್ಸುಗಳನ್ನ ಹಿಪ್ನಾಟೈಸ್‌ಗೊಳಿಸುವ ಸಮೂಹ ಮಾಧ್ಯಮಗಳು ನಮ್ಮೊಳಗೆ ಮೌಢ್ಯ ಬಿತ್ತುವ ಹುಸಿ ಭಾವುಕತೆ ತುಂಬುತ್ತಾ, ಎಲ್ಲ ಹೊಸ ಕಲ್ಪನೆಗಳನ್ನು ಕನಸುಗಳನ್ನು ಹೊಸಗಿಹಾಕುವ ನಿಜವಾದ ಬುಲ್‌ಡೋಜರ್‌ಗಳಾಗಿವೆ. ಜಗತ್ತನ್ನು ನಮ್ಮ ಅಂಗೈಯಲ್ಲಿಡುವ ಈ ತಂತ್ರಜ್ಞಾನ ಅನುಕೂಲಗಳು ತಮ್ಮ ಉಪಯುಕ್ತತೆ ಮತ್ತು ಸೌಲಭ್ಯಗಳ ಸೋಗಿನಲ್ಲಿ ಮನುಷ್ಯನ ಸಹಜತೆಯನ್ನೇ ನುಂಗುತ್ತಿದೆ.

ಇವುಗಳ ನೆರಳಲ್ಲೇ ಹೆಡೆ ಎತ್ತುವ ಮನಸ್ಸುಗಳಿಗೆ ಭ್ರಷ್ಟತೆಯಾಗಲೀ ಲಂಪಟ ತನವಾಗಲಿ ಅಪರಾಧವೆನ್ನಿಸುವುದೇ ಇಲ್ಲ. ಎಲ್ಲ ಕ್ಷೇತ್ರಗಳಲ್ಲಿ ತುಂಬಿರುವ ಹುಂಬತನ ಮತ್ತು ಎಡಬಿಡಂಗಿತನಗಳ ಎಲ್ಲಾ ಲಾಭ ಪಡೆಯುತ್ತಿರುವ ಜನಗಳ ಕಾಲ ಹುಲುಸಾಗಿದೆ. ಅನೇಕರ ಪ್ರೋಗ್ರೆಸಿವ್ ಪೋಸುಗಳು ಹಿಂದೆ ಕೆಲಸ ಮಾಡುವ ಮೂಢ ನಂಬಿಕೆಗಳಾಗಲೀ ಅಬ್ಬರಗಳಾಗಲೀ ಕಾಣುವುದೇ ಇಲ್ಲ. ನಿಜದ ಎಲ್ಲ ಬಾಗಿಲುಗಳನ್ನು ಮುಚ್ಚಿಹಾಕುತ್ತದೆ. ನಾವು ಪಡೆದ ವಿದ್ಯೆ, ಯೋಚಿಸೋ ನಮ್ಮ ಮನಸ್ಸು ಅದರ ಪ್ರಾಮಾಣಿಕ ನಂಬಿಕೆಗಳು ಇವೆಲ್ಲವೂ ಸುಳ್ಳೇನೋ ನಿರರ್ಥಕವೇನೋ ಎನ್ನಿಸುತ್ತದೆ. ಎಲ್ಲರಂತೆ ನಾವುಗಳೂ ಮಂದೆಯೊಳಗೆ ಯೋಚಿಸೋ ಮನಸ್ಸುಗಳಿಲ್ಲದೆ ತರ್ಕಿಸೋ ಲಾಜಿಕ್ಕುಗಳಿಲ್ಲದೆ ಹಾಯಾಗಿ ? ಇರಬಹುದಿತ್ತೆ ಎನ್ನಿಸುತ್ತದೆ. ಕೆಲವು ಕ್ಷಣಗಳ ನಂತರ ಅಂದು ಒಪ್ಪಿಗೆ ಯಾಗುವುದಿಲ್ಲ.

ಕತ್ತಲು ತುಂಬಿದ ರಾತ್ರಿಗಳಲ್ಲಿ ಶಬ್ಧಗಳನ್ನುಳಿದು ಇನ್ನೇನೂ ಗೋಚರಿಸುವುದಿಲ್ಲ ಎಲ್ಲೋ ಒಂದೆರಡು ಮಿಣಕ್ಕನೋ ಮಿಂಚುಹುಳುಗಳೂ ಇರಬಹುದಲ್ಲಾ ?

ಅನೇಕ ಅನಿವಾರ್ಯ ಕಾರಣಗಳಿಂದ ಸಂಚಯ ಬಹಳ ತಡವಾಗಿ ನಿಮ್ಮ ಕೈ ಸೇರಿದೆ ಕ್ಷಮಿಸಿ.

**–ಸಂಪಾದಕ**